# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 943
ಸದಸ್ಯರ ಹೆಸರು : ಡಾ|| ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 21-12-2021.
ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
| --- | --- | --- |
| ಅ | ರಾಜ್ಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿರುವ ಅಂಗನವಾಡಿ ಕೇಂದ್ರಗಳ ಸಂಖ್ಯೆ ಎಷ್ಟು; ಈ ಅಂಗನವಾಡಿ ಕೇಂದ್ರಗಳಲ್ಲಿರುವ ಮಕ್ಕಳ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು) | ರಾಜ್ಯದಲ್ಲಿ 66361 ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದು, ಈ ಅಂಗನವಾಡಿ ಕೇಂದ್ರಗಳಲ್ಲಿ 6 ತಿಂಗಳಿಂದ 6 ವರ್ಷದ ಒಟ್ಟು 4102159 ಮಕ್ಕಳು ದಾಖಲಾಗಿರುತ್ತಾರೆ. ಸದರಿ ಅಂಗನವಾಡಿ ಕೇಂದ್ರಗಳ ಸಂಖ್ಯೆ ಮತ್ತು ಫಲಾನುಭವಿಗಳ ಜಿಲ್ಲಾವಾರು ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| ಆ | ಈ ಅಂಗನವಾಡಿ ಕೇಂದ್ರಗಳಲ್ಲಿ ಸೇರಿರುವ ಮಕ್ಕಳಿಗೆ ಸರ್ಕಾರದಿಂದ ನೀಡುತ್ತಿರುವ ಸೌಕರ್ಯಗಳೇನು; (ವಿವರ ನೀಡುವುದು) | **<u>ಪೂರಕ ಪೌಷ್ಠಿಕ ಆಹಾರ :</u>**<br><br>ಅಂಗನವಾಡಿ ಕೇಂದ್ರಗಳಲ್ಲಿ ದಾಖಲಾದ 6 ರಿಂದ 6 ವರ್ಷದ ಮಕ್ಕಳಿಗೆ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ 300 ದಿನಗಳ ಪೂರಕ ಪೌಷ್ಠಿಕ ಆಹಾರವನ್ನು ನೀಡಲಾಗುತ್ತಿದೆ.<br><br>• ಎಲ್ಲಾ ಮಕ್ಕಳಿಗೆ ಅಂಗನವಾಡಿ ಕೇಂದ್ರದಲ್ಲಿ ಪ್ರತಿ ದಿನ ರೂ.8.00 ಮೌಲ್ಯದ ಪೂರಕ ಪೌಷ್ಠಿಕ ಆಹಾರವನ್ನು ನೀಡಲಾಗುತ್ತಿದೆ.<br>• ತೀವ್ರ ಅಪೌಷ್ಠಿಕ ಮಕ್ಕಳಿಗೆ ಪ್ರತಿ ದಿನ ರೂ.12.00 ಮೌಲ್ಯದ ಪೂರಕ ಪೌಷ್ಠಿಕ ಆಹಾರವನ್ನು ನೀಡಲಾಗುತ್ತಿದೆ.<br>• ಅಂಗನವಾಡಿಗೆ ಹಾಜರಾಗುವ 3 ವರ್ಷದಿಂದ 6 ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ.<br>• ರಾಜ್ಯ ಸರ್ಕಾರದ ಕ್ಷೀರಭಾಗ್ಯ ಯೋಜನೆಯಡಿ 6 ತಿಂಗಳಿಂದ 6 ವರ್ಷದ ಎಲ್ಲಾ ಅಂಗನವಾಡಿ ಮಕ್ಕಳಿಗೆ ವಾರದಲ್ಲಿ 5 ದಿನ 150 ಮಿ.ಲಿ ಹಾಲನ್ನು (15ಗ್ರಾಂ ಕೆನೆಭರಿತ ಹಾಲಿನಪುಡಿ, 10 ಗ್ರಾಂ ಸಕ್ಕರೆ) ನೀಡಲಾಗುತ್ತಿದೆ.<br>• 6 ತಿಂಗಳಿಂದ 3 ವರ್ಷದ ತೀವ್ರ ಅಪೌಷ್ಠಿಕ ಮಕ್ಕಳಿಗೆ ಮತ್ತು 5 ಹಿಂದುಳಿದ ಜಿಲ್ಲೆಗಳಾದ ಬೀದರ್, ಕಲಬುರಗಿ, ರಾಯಚೂರು, ಯಾದಗಿರಿ ಮತ್ತು ಕೊಪ್ಪಳ ಇಲ್ಲಿಯ ಸಾಧಾರಣ ಅಪೌಷ್ಠಿಕ ಮಕ್ಕಳಿಗೆ ವಾರದಲ್ಲಿ 3 ದಿನ ಮೊಟ್ಟೆ ಹಾಗೂ 3 ದಿನ 200 ಎಂ.ಎಲ್ ಹಾಲನ್ನು, ಮೊಟ್ಟೆ ಸ್ವೀಕರಿಸದಿರುವ ಮಕ್ಕಳಿಗೆ ವಾರದಲ್ಲಿ 6 ದಿನ ಹಾಲನ್ನು ನೀಡಲಾಗುತ್ತಿದೆ. |

- 3 ವರ್ಷದಿಂದ 6 ವರ್ಷದ ತೀವ್ರ ಅಪೌಷ್ಠಿಕ ಮಕ್ಕಳಿಗೆ ಮತ್ತು 5 ಹಿಂದುಳಿದ ಜಿಲ್ಲೆಗಳಾದ ಬೀದರ್, ಕಲಬುರಗಿ, ರಾಯಚೂರು, ಯಾದಗಿರಿ ಮತ್ತು ಕೊಪ್ಪಳ ಇಲ್ಲಿಯ ಸಾಧಾರಣ ಅಪೌಷ್ಠಿಕ ಮಕ್ಕಳಿಗೆ ವಾರದಲ್ಲಿ 5 ದಿನ ಮೊಟ್ಟೆ ಹಾಗೂ 3 ದಿನ 200 ಎಂ.ಎಲ್ ಹಾಲನ್ನು, ಮೊಟ್ಟೆ ಸ್ವೀಕರಿಸದಿರುವ ಮಕ್ಕಳಿಗೆ ವಾರದಲ್ಲಿ 6 ದಿನ ಹಾಲನ್ನು ನೀಡಲಾಗುತ್ತಿದೆ.
- ತೀವ್ರ ಅಪೌಷ್ಠಿಕ ಮಕ್ಕಳಿಗೆ ಆರೋಗ್ಯ ಇಲಾಖೆಯ ಪೌಷ್ಠಿಕ ಪುನರ್ವಸತಿ ಕೇಂದ್ರ (NRC) ಗಳಲ್ಲಿ ಚಿಕಿತ್ಸೆ ನೀಡಲಾಗುತ್ತಿದೆ.
- ಆರೋಗ್ಯ ಮತ್ತು ಪೌಷ್ಠಿಕ ಶಿಬಿರಗಳನ್ನು ಏರ್ಪಡಿಸಿ ಅಧಿಕ ಪೌಷ್ಠಿಕತೆಯುಳ್ಳ ಆಹಾರಗಳನ್ನು ತಯಾರಿಸುವ ಕುರಿತು ಮತ್ತು ಮಕ್ಕಳಿಗೆ ಪೌಷ್ಠಿಕತೆಯುಳ್ಳ ಆಹಾರವನ್ನು ನೀಡಲು ತಿಳುವಳಿಕೆ ನೀಡಲಾಗುತ್ತಿ .

**ಚುಚ್ಚುಮದ್ದು ಕಾರ್ಯಕ್ರಮ :**

6 ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಮತ್ತು ಗರ್ಭಿಣಿಯರಿಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸಹಯೋಗದೊಂದಿಗೆ ನಿಗದಿತ ಚುಚ್ಚುಮದ್ದನ್ನು ನೀಡಲಾಗುತ್ತಿದೆ.

**ಆರೋಗ್ಯ ತಪಾಸಣೆ :**

3 ತಿಂಗಳಿಗೊಮ್ಮೆ ಅಂಗನವಾಡಿ ಕೇಂದ್ರದಲ್ಲಿ ದಾಖಲಾಗಿರುವ ಎಲ್ಲಾ ಮಕ್ಕಳ ಆರೋಗ್ಯ ತಪಾಸಣೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸಹಯೋಗದೊಂದಿಗೆ ನಡೆಸಲಾಗುತ್ತಿದೆ.

**ಮಾಹಿತಿ ಸೇವೆ :**

ಅಂಗನವಾಡಿ ಕೇಂದ್ರಗಳಿಗೆ ವೈದ್ಯಾಧಿಕಾರಿಗಳು ಭೇಟಿ ನೀಡಿ ಮಕ್ಕಳ ಆರೋಗ್ಯ ತಪಾಸಣೆ ಮಾಡಿದಾಗ ಹೆಚ್ಚಿನ ತಪಾಸಣೆಗೆ ಅಥವಾ ಚಿಕಿತ್ಸೆಗೆ ತಾಲ್ಲೂಕು ಆರೋಗ್ಯ ಕೇಂದ್ರ / ಜಿಲ್ಲಾ ಆರೋಗ್ಯ ಕೇಂದ್ರಕ್ಕೆ / ಪೌಷ್ಠಿಕ ಪುನರ್ವಸತಿ ಕೇಂದ್ರಗಳಿಗೆ ಕಳುಹಿಸಲು ಸೂಚಿಸುತ್ತಾರೆ. ವೈದ್ಯರು ಸೂಚಿಸಿದಂತೆ ಅಂಗನವಾಡಿ ಕಾರ್ಯಕರ್ತೆಯು ಹೆಚ್ಚಿನ ಚಿಕಿತ್ಸೆ, ತಪಾಸಣೆಗೆ ಮಕ್ಕಳನ್ನು ಕಳುಹಿಸಿಕೊಡಲಾಗುತ್ತಿದೆ.

**ಶಾಲಾಪೂರ್ವ ಶಿಕ್ಷಣ :**

ಅಂಗನವಾಡಿ ಕೇಂದ್ರಕ್ಕೆ 3 ರಿಂದ 6 ವರ್ಷದ ಮಕ್ಕಳು ಮಾತ್ರ ಪ್ರತೀ ದಿನ ಬೆಳಿಗ್ಗೆ 9.30 ರಿಂದ ಸಂಜೆ 4.00 ಗಂಟೆಯವರೆಗೆ ಹಾಜರಾಗುತ್ತಾರೆ. ಈ ಮಕ್ಕಳಿಗೆ ಅಂಗನವಾಡಿ ಕಾರ್ಯಕರ್ತೆಯು ರೂಢಿಗತವಲ್ಲದ ಶಾಲಾಪೂರ್ವ ಶಿಕ್ಷಣವನ್ನು ನೀಡುತ್ತಾರೆ.

**ಪೋಷಣ್ ಅಭಿಯಾನ ಯೋಜನೆ :**

ಈ ಯೋಜನೆಯಡಿ ಪ್ರತೀ ತಿಂಗಳು 2 ಸಮುದಾಯ ಆಧಾರಿತ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗುವುದು. ಸೀಮಂತ ಕಾರ್ಯಕ್ರಮ, ಸುಪೋಷಣ್ ದಿವಸ, ಅನ್ನ ಪ್ರಾಶನ, ಮುಂತಾದ ಚಟುವಟಿಕೆಗಳನ್ನು ನಡೆಸಲಾಗುವುದು.

| | | |
|---|---|---|
| ಇ | ಅಂಗನವಾಡಿ ಕೇಂದ್ರಗಳಿಗೆ ಸರಬರಾಜಾಗುತ್ತಿರುವ ಆಹಾರ ಪದಾರ್ಥಗಳು ಕಳಪೆ ಗುಣಮಟ್ಟದಿಂದ ಕೂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಅಂತಹ ಪ್ರಕರಣಗಳ ವಿವರಗಳನ್ನು ನೀಡುವುದು. | ಕೆಲವು ಎಂ.ಎಸ್.ಪಿ.ಟಿ.ಸಿ.ಗಳು ಕಳಪೆ ಗುಣಮಟ್ಟದಿಂದ ಕೂಡಿರುವ ಆಹಾರ ಪದಾರ್ಥಗಳ ಸ್ರಬರಾಜು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಅಂತಹ ಎಂ.ಎಸ್.ಪಿ.ಟಿ.ಸಿ.ಗಳಿಗೆ ಕಾರಣ ಕೇಳುವ ನೋಟೀಸನ್ನು ನೀಡಿ, ಉಪ ನಿರ್ದೇಶಕರಿಂದ ವರದಿ ಪಡೆಯಲಾಗುತ್ತಿದೆ.<br>(ಎಂ.ಎಸ್.ಪಿ.ಟಿ.ಸಿ.ಗಳ ವಿವರ ಹಾಗೂ ನ್ಯೂನತೆಯನ್ನು ಅನುಬಂಧ-2ರಲ್ಲಿ ಒದಗಿಸಲಾಗಿದೆ) |
| ಈ | ಆಹಾರ ಸರಬರಾಜುದಾರರೊಂದಿಗೆ ಇಲಾಖಾ ಅಧಿಕಾರಿಗಳು ಶಾಮೀಲಾಗಿ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿರುವ ಪ್ರಕರಣಗಳ ವಿವರ ನೀಡುವುದು ? | ಆಹಾರ ಸರಬರಾಜುದಾರರೊಂದಿಗೆ ಇಲಾಖಾ ಅಧಿಕಾರಿಗಳು ಶಾಮೀಲಾಗಿ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿರುವ ಪ್ರಕರಣಗಳು ಗಮನಕ್ಕೆ ಬಂದಿರುವುದಿಲ್ಲ. |

**ಸಂಖ್ಯೆ**: ಮಮಇ 320 ಐಸಿಡಿ 2021

Halappa BA

**(ಆಚಾರ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರಿಕರ ಸಬಲೀಕರಣ ಸಚಿವರು.

**ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಡಾ: ವೈ.ಎ. ನಾರಾಯಣಸ್ವಾಮಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 943 ಕ್ಕೆ ಒದಗಿಸಲಾದ ಅನುಬಂಧ-1**

| ಕ್ರ. ಸಂ. | ಜಿಲ್ಲೆಯ ಹೆಸರು | ಜಿಲ್ಲಾವಾರು ಅಂಗನವಾಡಿ ಕೇಂದ್ರಗಳ ಸಂಖ್ಯೆ | ಜಿಲ್ಲಾವಾರು ಅಂಗನವಾಡಿ ಕೇಂದ್ರಗಳಲ್ಲಿರುವ 6 ತಿಂಗಳಿಂದ 6 ವರ್ಷದ ಮಕ್ಕಳ ಸಂಖ್ಯೆ |
|---|---|---|---|
| 1 | ಬಾಗಲಕೋಟೆ | 2221 | 193090 |
| 2 | ಬೆಂಗಳೂರು (ಗ್ರಾ) | 1230 | 61491 |
| 3 | ರಾಮನಗರ | 1543 | 59646 |
| 4 | ಬೆಂಗಳೂರು (ನ) | 2587 | 198815 |
| 5 | ಬೆಳಗಾವಿ | 5331 | 431796 |
| 6 | ಬಳ್ಳಾರಿ | 2828 | 249621 |
| 7 | ಬೀದರ್ | 1898 | 146388 |
| 8 | ವಿಜಯಪುರ | 2331 | 239380 |
| 9 | ಚಾಮರಾಜನಗರ | 1425 | 60258 |
| 10 | ಚಿಕ್ಕಮಗಳೂರು | 1825 | 59939 |
| 11 | ಚಿತ್ರದುರ್ಗ | 2333 | 124502 |
| 12 | ಮಂಗಳೂರು | 2108 | 150207 |
| 13 | ದಾವಣಗೆರೆ | 1730 | 119607 |
| 14 | ಧಾರವಾಡ | 1511 | 127845 |
| 15 | ಗದಗ | 1166 | 93194 |
| 16 | ಕಲಬುರಗಿ | 3140 | 192343 |
| 17 | ಯಾದಗಿರಿ | 1387 | 145156 |
| 18 | ಹಾಸನ | 2548 | 83355 |
| 19 | ಹಾವೇರಿ | 1918 | 135829 |
| 20 | ಕೋಲಾರ | 2080 | 99421 |
| 21 | ಚಿಕ್ಕಬಳ್ಳಾಪುರ | 1964 | 92277 |
| 22 | ಕೊಡಗು | 871 | 28568 |
| 23 | ಕೊಪ್ಪಳ | 1850 | 146079 |
| 24 | ಮಂಡ್ಯ | 2546 | 95312 |
| 25 | ಮೈಸೂರು | 2875 | 150071 |
| 26 | ರಾಯಚೂರು | 2668 | 214939 |
| 27 | ಶಿವಮೊಗ್ಗ | 2460 | 100150 |
| 28 | ತುಮಕೂರು | 4109 | 147826 |
| 29 | ಉಡುಪಿ | 1191 | 60644 |
| 30 | ಉತ್ತರ ಕನ್ನಡ | 2687 | 94410 |
| | **ಒಟ್ಟು** | **66361** | **4102159** |

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಡಾ|| ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 943ಕ್ಕೆ ಅನುಬಂಧ-2**

**ಎಂ.ಎಸ್.ಪಿ.ಟಿ.ಸಿ.ಗಳ ವಿವರ:**

1. ಮೈಸೂರು ನಗರ ಮತ್ತು ಗ್ರಾಮಾಂತರ ಎಂ.ಎಸ್.ಪಿ.ಟಿ.ಸಿ., ಮೈಸೂರು ಜಿಲ್ಲೆ.
2. ನಂಜನಗೂಡು ತಾಲ್ಲೂಕು, ಎಂ.ಎಸ್.ಪಿ.ಟಿ.ಸಿ., ಮೈಸೂರು ಜಿಲ್ಲೆ.
3. ಚಾಮರಾಜನಗರ ತಾಲ್ಲೂಕು, ಎಂ.ಎಸ್.ಪಿ.ಟಿ.ಸಿ., ಮೈಸೂರು ಜಿಲ್ಲೆ.
4. ಶಿವಮೊಗ್ಗ ತಾಲ್ಲೂಕು, ಎಂ.ಎಸ್.ಪಿ.ಟಿ.ಸಿ., ಮೈಸೂರು ಜಿಲ್ಲೆ.
5. ಭದ್ರಾವತಿ ತಾಲ್ಲೂಕು, ಎಂ.ಎಸ್.ಪಿ.ಟಿ.ಸಿ., ಮೈಸೂರು ಜಿಲ್ಲೆ.
6. ಗದಗ ತಾಲ್ಲೂಕು, ಎಂ.ಎಸ್.ಪಿ.ಟಿ.ಸಿ., ಮೈಸೂರು ಜಿಲ್ಲೆ.
7. ಕೊಪ್ಪಳ ತಾಲ್ಲೂಕು, ಎಂ.ಎಸ್.ಪಿ.ಟಿ.ಸಿ., ಮೈಸೂರು ಜಿಲ್ಲೆ.

**ನ್ಯೂನತೆಗಳ ವಿವರ:**

1. ಕಚ್ಚಾ ವಸ್ತುಗಳ ಅಸಮರ್ಪಕ ನಿರ್ವಹಣೆ: ಕಚ್ಚಾ ವಸ್ತುಗಳ ಸಂಗ್ರಹಣೆಗಾಗಿ ಪ್ರತ್ಯೇಕ ಸ್ಥಳ ನಿರ್ವಹಿಸದೆ ಸಂಸ್ಕರಣಾ ಪ್ರದೇಶದಲ್ಲಿಯೇ ನಿರ್ವಹಿಸಿರುವುದರಿಂದ ಅಡ್ಡ ಪರಿಣಾಮಗಳು ಉಂಟಾಗಿರುವುದು.
2. ಪ್ಯಾಕಿಂಗ್ ಮಾಡುವ ಮುನ್ನ ಕಚ್ಚಾ ವಸ್ತುಗಳನ್ನು ಪ್ರತ್ಯೇಕವಾಗಿ ಶುಚಿಗೊಳಿಸದೇ ಇರುವುದು.
3. ಆಹಾರ ಉತ್ಪಾದನೆ ಮೇಲ್ವಿಚಾರಣೆಗೆ ತಾಂತ್ರಿಕ ಅಥವಾ ಪರಿಣಿತ ವ್ಯಕ್ತಿಗಳನ್ನು ಹೊಂದಿರದೇ ಇರುವುದು.
4. "ಪುಷ್ಠಿ" ತಯಾರಿಕೆಯನ್ನು ನಿರ್ಧಿಷ್ಟಪಡಿಸಿದ ಸೂತ್ರದನ್ವಯ (Specified Formulation) ದಾಖಲೆಗಳನ್ನು ನಿರ್ವಹಿಸದೇ ಇರುವುದು: ಪೌಷ್ಠಿಕ ಆಹಾರ ತಯಾರಿಕೆಯಲ್ಲಿ ಎಂ.ಎಸ್.ಪಿ.ಟಿ.ಸಿ.ಯು ಕಡ್ಲೆಕಾಯಿ ಮತ್ತು ಸೋಯಾಬಿನ್ ಗಳನ್ನು ಅಗತ್ಯವಿರುವ Roasting ಗೆ ಒಳಪಡಿಸದೇ ಇರುವುದು.
5. ಎಂ.ಎಸ್.ಪಿ.ಟಿ.ಸಿ. ಯಲ್ಲಿ ನಿರ್ವಹಿಸುವ ಯಂತ್ರಗಳಿಗೆ ಸಮರ್ಪಕ ನಿರ್ವಹಣೆ ಮತ್ತು ಉನ್ನತೀಕರಣದ ಅಗತ್ಯವಿರುತ್ತದೆ. ಸದಸ್ಯರು ಯಂತ್ರಗಳನ್ನು ನಿರ್ವಹಿಸಲು ಅಗತ್ಯವಿರುವ ತಾಂತ್ರಿಕ ನಿಪುಣತೆಯನ್ನು ಹೊಂದಿರುವುದಿಲ್ಲ ಮತ್ತು ಯಂತ್ರಗಳ ನಿರ್ವಹಣೆಯನ್ನು ಅರ್ಹ ತಾಂತ್ರಿಕ ವ್ಯಕ್ತಿಗಳು ನಿರ್ವಹಿಸುತ್ತಿರುವುದಿಲ್ಲ.
6. ಕಚ್ಚಾ ವಸ್ತುಗಳ ಮತ್ತು ಪೌಷ್ಠಿಕ ಆಹಾರ ಪದಾರ್ಥಗಳ ಸಂಗ್ರಹಣೆಗೆ ಅಗತ್ಯ ಸ್ಥಳಾವಕಾಶವನ್ನು ಹೊಂದಿಲ್ಲದೇ ಇರುವುದು.
7. ಫಾರ್ಟಿಫೈಡ್ ಆಹಾರ ತಯಾರಿಸಲು ಬೇಕಾಗುವ ಫಾರ್ಮುಲಾ, ನಿರ್ಧಿಷ್ಠತೆ, ತಯಾರಿಕಾ ವಿಧಾನಗಳ ಕುರಿತಂತೆ ಎಂ.ಎಸ್.ಪಿ.ಟಿ.ಸಿ. ಮಹಿಳಾ ಸದಸ್ಯರಿಗೆ ಸಮರ್ಪಕ ತರಬೇತಿ ಅಗತ್ಯತೆ.
8. ಪೌಷ್ಠಿಕ ಆಹಾರದ ಮಾದರಿಗಳನ್ನು ಪಡೆದು ಪ್ರಯೋಗಾಲಯಗಳಲ್ಲಿ ಪರೀಕ್ಷಿಸಲಾಗಿ, ಪ್ರಯೋಗಾಲಯದ ವರದಿಯಲ್ಲಿ ಕ್ಯಾಲೋರಿಸ್ ಮತ್ತು ಪ್ರೋಟೀನ್ ಪ್ರಮಾಣವು ಭಾರತ ಸರ್ಕಾರವು ನಿಗಧಿಪಡಿಸಿರುವ ಪ್ರಮಾಣಕ್ಕಿಂತ ಕಡಿಮೆ ಇರುವುದಾಗಿ ತಿಳಿಸಲಾಗಿದೆ.

*************

# ಕರ್ನಾಟಕ ಸರ್ಕಾರ

ಸಂ: ಡಿಡಬ್ಲ್ಯೂಸಿ/ಐಸಿಡಿ/ಪಿಆರ್‌ಸಿ/04/2016-17
(ಭಾಗ-2)/e-637872

ನಿರ್ದೇಶಕರ ಕಛೇರಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,
ಡಾ: ಬಿ.ಆರ್.ಅಂಬೇಡ್ಕರ್ ವೀಧಿ,
ಬಹುಮಹಡಿಗಳ ಕಟ್ಟಡ, ಬೆಂಗಳೂರು-01
ದಿನಾಂಕ: 15/12/2021.

## ಕಾರಣ ಕೇಳುವ ನೋಟಿಸು

ವಿಷಯ : ಎಂ.ಎಸ್.ಪಿ.ಟಿ.ಸಿ. ಗಳ ಕಳಪೆ ನಿರ್ವಹಣೆ ಕುರಿತು.

ಉಲ್ಲೇಖ : FNB ಮತ್ತು DFRL ಸಂಸ್ಥೆಯ ದಿನಾಂಕ: 19/08/2021ರ ವರದಿ.

** ** **

ರಿಟ್ ಅರ್ಜಿ ಸಂಖ್ಯೆ: 16153/2019 ಪ್ರಕರಣದಲ್ಲಿ ದಿನಾಂಕ: 14/12/2020 ರಂದು ಮಾನ್ಯ ರಾಜ್ಯ ಉಚ್ಚ ನ್ಯಾಯಾಲಯವು ನೀಡಿರುವ ನಿರ್ದೇಶನದನ್ವಯ ವಿಷಯವನ್ನು ಮರುಪರಿಶೀಲನೆ ಮಾಡಲು ನೀಡಿರುವ ಆದೇಶದಂತೆ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಲಾದ ಸಮಿತಿಯ ದಿನಾಂಕ: 06/07/2021ರ ಸಭೆಯ ನಿರ್ಧಾರದಂತೆ DFRL ಮತ್ತು Food and Nutrition Board (FNB) ರವರಿಂದ ಜಂಟಿ ವರದಿ ಸಲ್ಲಿಸಲು ಸೂಚಿಸಲಾಗಿತ್ತು. ಅದರಂತೆ ಸದರಿ ಸಂಸ್ಥೆಯ ವತಿಯಿಂದ ತಮ್ಮ ಎಂ.ಎಸ್.ಪಿ.ಟಿ.ಸಿ. ಗೆ ದಿನಾಂಕ: 26/07/2021 ರಿಂದ 29/07/2021 ರವರೆಗೆ ಭೇಟಿ ನೀಡಿದ್ದು, ಸದರಿ ಭೇಟಿ ವೇಳೆಯಲ್ಲಿ ಈ ಕೆಳಕಂಡ ಅಂಶಗಳನ್ನು ಗಮನಿಸಲಾಗಿದೆ.

1. ಕಚ್ಚಾ ವಸ್ತುಗಳ ಅಸಮರ್ಪಕ ನಿರ್ವಹಣೆ : ಕಚ್ಚಾ ವಸ್ತುಗಳ ಸಂಗ್ರಹಣೆಗಾಗಿ ಪ್ರತ್ಯೇಕ ಸ್ಥಳ ನಿರ್ವಹಿಸದೆ ಸಂಸ್ಕರಣಾ ಪ್ರದೇಶದಲ್ಲಿಯೇ ನಿರ್ವಹಿಸಿರುವುದರಿಂದ ಅಡ್ಡ ಪರಿಣಾಮಗಳು ಉಂಟಾಗಿರುವುದು.
2. ಪ್ಯಾಕಿಂಗ್ ಮಾಡುವ ಮುನ್ನ ಕಚ್ಚಾ ವಸ್ತುಗಳನ್ನು ಪ್ರತ್ಯೇಕವಾಗಿ ಶುಚಿಗೊಳಿಸದೇ ಇರುವುದು.
3. ಆಹಾರ ಉತ್ಪಾದನೆ ಮೇಲ್ವಿಚಾರಣೆಗೆ ತಾಂತ್ರಿಕ ಅಥವಾ ಪರಿಣಿತ ವ್ಯಕ್ತಿಗಳನ್ನು ಹೊಂದಿರದೇ ಇರುವುದು.
4. "ಪುಷ್ಟಿ" ತಯಾರಿಕೆಯನ್ನು ನಿರ್ದಿಷ್ಟಪಡಿಸಿದ ಸೂತ್ರದನ್ವಯ (Specified Formulation) ದಾಖಲೆಗಳನ್ನು ನಿರ್ವಹಿಸದೇ ಇರುವುದು : ಪೌಷ್ಠಿಕ ಆಹಾರ ತಯಾರಿಕೆಯಲ್ಲಿ ಎಂ.ಎಸ್.ಪಿ.ಟಿ.ಸಿ. ಯು ಕಡ್ಲೆಕಾಯಿ ಮತ್ತು ಸೋಯಾಬಿನ್‌ಗಳನ್ನು ಅಗತ್ಯವಿರುವ Roasting ಗೆ ಒಳಪಡಿಸದೇ ಇರುವುದು.
5. ಎಂ.ಎಸ್.ಪಿ.ಟಿ.ಸಿ. ಯಲ್ಲಿ ನಿರ್ವಹಿಸುವ ಯಂತ್ರಗಳಿಗೆ ಸಮರ್ಪಕ ನಿರ್ವಹಣೆ ಮತ್ತು ಉನ್ನತೀಕರಣದ ಅಗತ್ಯವಿರುತ್ತದೆ. ಸದಸ್ಯರು ಯಂತ್ರಗಳನ್ನು ನಿರ್ವಹಿಸಲು ಅಗತ್ಯವಿರುವ ತಾಂತ್ರಿಕ ನಿಪುಣತೆಯನ್ನು ಹೊಂದಿರುವುದಿಲ್ಲ ಮತ್ತು ಯಂತ್ರಗಳ ನಿರ್ವಹಣೆಯನ್ನು ಅರ್ಹ ತಾಂತ್ರಿಕ ವ್ಯಕ್ತಿಗಳು ನಿರ್ವಹಿಸುತ್ತಿರುವುದಿಲ್ಲ.
6. ಕಚ್ಚಾ ವಸ್ತುಗಳ ಮತ್ತು ಪೌಷ್ಠಿಕ ಆಹಾರ ಪದಾರ್ಥಗಳ ಸಂಗ್ರಹಣೆಗೆ ಅಗತ್ಯ ಸ್ಥಳಾವಕಾಶವನ್ನು ಹೊಂದಿಲ್ಲದೇ ಇರುವುದು.
7. ಫೋರ್ಟಿಫೈಡ್ ಆಹಾರ ತಯಾರಿಸಲು ಬೇಕಾಗುವ ಫಾರ್ಮುಲಾ, ನಿರ್ದಿಷ್ಟತೆ, ತಯಾರಿಕಾ ವಿಧಾನಗಳ ಕುರಿತಂತೆ ಎಂ.ಎಸ್.ಪಿ.ಟಿ.ಸಿ. ಮಹಿಳಾ ಸದಸ್ಯರಿಗೆ ಸಮರ್ಪಕ ತರಬೇತಿ ಅಗತ್ಯತೆ.